# ಕರ್ನಾಟಕ ವಿಧಾನ ಪರಿಷತ್

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1182(1344) |
| ಸದಸ್ಯರ ಹೆಸರು | ಶ್ರೀ ಕೆ.ಎ.ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿರುವವರು) |
| ವಿಷಯ | ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ಯೋಜನೆಗಳ ಬಗ್ಗೆ |
| ಉತ್ತರಿಸಬೇಕಾದ ದಿನಾಂಕ | 18.03.2020 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |
| ಪ್ರಶ್ನೆ | ಉತ್ತರ |
| ಅ) ಬಡವರು, ಮಹಿಳೆಯರು ಮತ್ತು ಹಿರಿಯ ನಾಗರೀಕರಿಗಾಗಿ ಸರ್ಕಾರದಲ್ಲಿ ಚಾಲ್ತಿಯಲ್ಲಿರುವ ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ಯೋಜನೆಗಳು ಯಾವುವು? | ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ನಿರ್ದೇಶನಾಲಯದಿಂದ ಈ ಕೆಳಕಂಡ ಪಿಂಚಣಿ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. |

| ಕ್ರ.ಸಂ. | ಯೋಜನೆ |
|---|---|
| 1. | ವೃದ್ಧಾಪ್ಯ ವೇತನ |
| 2. | ವಿಧವಾ ವೇತನ |
| 3. | ಅಂಗವಿಕಲ ವೇತನ |
| 4. | ಸಂಧ್ಯಾ ಸುರಕ್ಷಾ ಯೋಜನೆ |
| 5. | ಮನಸ್ವಿನಿ |
| 6. | ಮೈತ್ರಿ |
| 7. | ಸಾಲ ಬಾದೆಯಿಂದ ಆತ್ಮಹತ್ಯೆ ಮಾಡಿಕೊಂಡ ರೈತನ ಪತ್ನಿಗೆ ವಿಧವಾ ವೇತನ |
| 8. | ಆಸಿಡ್ ದಾಳಿಗೆ ಒಳಗಾದ ಮಹಿಳೆಯರಿಗೆ ಪಿಂಚಣಿ ಯೋಜನೆ |
| 9. | ಎಂಡೋಸ್ಪನ್ ಸಂತ್ರಸ್ಥರಿಗೆ ಮಾಸಾಶನ |

<table>
<tr>
<td>ಆ) ಕಳೆದ 3 ವರ್ಷಗಳ ಅವಧಿಯಲ್ಲಿ ಈ ಯೋಜನೆಗಳ ಅಡಿಯಲ್ಲಿ ನೆರವು ಕೋರಿ ಸಲ್ಲಿಕೆಯಾಗಿರುವ ಒಟ್ಟು ಅರ್ಜಿಗಳೆಷ್ಟು; (ಯೋಜನಾವಾರು ವಿವರ ನೀಡುವುದು)</td>
<td>ವಿವಿಧ ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ಯೋಜನೆಗಳಡಿ ಕಳೆದ 3 ವರ್ಷಗಳಲ್ಲಿ ಒಟ್ಟು 12,98,885 ಅರ್ಜಿಗಳನ್ನು ಸ್ವೀಕರಿಸಲಾದ ಯೋಜನಾವಾರು ಅರ್ಜಿಗಳ ವಿವರ ಕೆಳಕಂಡಂತಿದೆ:
<table>
<tr><th rowspan="2">ಕ್ರ. ಸಂ.</th><th rowspan="2">ಯೋಜನೆ</th><th colspan="3">ಸ್ವೀಕೃತವಾದ ಅರ್ಜಿಗಳ ಸಂಖ್ಯೆ</th></tr>
<tr><th>2016-17</th><th>2017-18</th><th>2018-19</th></tr>
<tr><td>1.</td><td>ವೃದ್ಧಾಪ್ಯ ವೇತನ</td><td>45693</td><td>79642</td><td>152656</td></tr>
<tr><td>2.</td><td>ವಿಧವಾ ವೇತನ</td><td>92716</td><td>82333</td><td>91571</td></tr>
<tr><td>3.</td><td>ಅಂಗವಿಕಲ ವೇತನ</td><td>49508</td><td>50126</td><td>53117</td></tr>
<tr><td>4.</td><td>ಸಂಧ್ಯಾ ಸುರಕ್ಷಾ ಯೋಜನೆ</td><td>221673</td><td>176128</td><td>166396</td></tr>
<tr><td>5.</td><td>ಮನಸ್ವಿನಿ</td><td>13078</td><td>10093</td><td>9264</td></tr>
<tr><td>6.</td><td>ಮೈತ್ರಿ</td><td>201</td><td>157</td><td>151</td></tr>
<tr><td>7.</td><td>ಸಾಲ ಭಾದೆಯಿಂದ ಆತ್ಮಹತ್ಯೆ ಮಾಡಿಕೊಂಡ ರೈತನ ಪತ್ನಿಗೆ ವಿಧವಾ ವೇತನ</td><td>2344</td><td>1025</td><td>740</td></tr>
<tr><td>8.</td><td>ಆಸಿಡ್ ದಾಳಿಗೆ ಒಳಗಾದ ಮಹಿಳೆಯರಿಗೆ ಪಿಂಚಣಿ ಯೋಜನೆ</td><td>82</td><td>119</td><td>72</td></tr>
<tr><td colspan="2">ಒಟ್ಟು</td><td>425295</td><td>399623</td><td>473967</td></tr>
</table>
ಹೊಸದಾಗಿ ಎಂಡೋಸ್ಪಾನ್ ಪಿಂಚಣಿ ಸೌಲಭ್ಯ ಕೋರಿ ಬರುವ ಅರ್ಜಿಗಳನ್ನು ನಾಡ ಕಛೇರಿಯಲ್ಲಿ ಸ್ವೀಕರಿಸಲು ತಂತ್ರಾಂಶದಲ್ಲಿ 2019ನೇ ಸಾಲಿನಿಂದ ಅವಕಾಶ ಕಲ್ಪಿಸಲಾಗಿದೆ.</td>
</tr>
<tr>
<td>ಇ)ಕಳೆದ 3 ವರ್ಷಗಳ ಅವಧಿಯಲ್ಲಿ ಈ ವಿವಿಧ ಯೋಜನೆಗಳಿಗಾಗಿ ಸರ್ಕಾರದಿಂದ ಬಿಡುಗಡೆಯಾಗಿರುವ ಅನುದಾನವೆಷ್ಟು; ಈ ಪೈಕಿ ಫಲಾನುಭವಿಗಳಿಗೆ ಬಿಡುಗಡೆ ಯಾಗಿರುವ ಅನುದಾನವೆಷ್ಟು; ಮತ್ತು ಫಲಾನುಭವಿಗಳ ಸಂಖ್ಯೆ ಎಷ್ಟು; (ಯೋಜನಾವಾರು ಮತ್ತು ವರ್ಷವಾರು ವಿವರ ನೀಡುವುದು)</td>
<td>ಕಳೆದ 3 ವರ್ಷಗಳಲ್ಲಿ ಈ ಯೋಜನೆಗಳ ಅನುಷ್ಠಾನಕ್ಕಾಗಿ ಬಿಡುಗಡೆಯಾಗಿರುವ ಅನುದಾನ, ಖರ್ಚು ಮತ್ತು ಫಲಾನುಭವಿಗಳ ಮಾಹಿತಿಯನ್ನು ಅನುಬಂಧದಲ್ಲಿ ನೀಡಲಾಗಿದೆ.</td>
</tr>
<tr>
<td>ಈ) ಈ ಯೋಜನೆಗಳಡಿಯಲ್ಲಿ ಸಕಾಲದಲ್ಲಿ ಅನುದಾನ ಬಿಡುಗಡೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;<br><br>ಉ) ಬಂದಿದ್ದಲ್ಲಿ; ಸಕಾಲದಲ್ಲಿ ಅನುದಾನ ಬಿಡುಗಡೆ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು?</td>
<td>ರಾಜ್ಯದಲ್ಲಿ ಜಾಲಿಯಲ್ಲಿರುವ ವಿವಿಧ ಸಾಮಾಜಿಕ ಭದ್ರತಾ ಯೋಜನೆಗಳಡಿ ಮಾಸಿಕ ಪಿಂಚಣಿ ವಿತರಣಾ ವ್ಯವಸ್ಥೆಯನ್ನು ಸಮರ್ಪಕವಾಗಿ ಹಾಗೂ ಪಾರದರ್ಶಕವಾಗಿ ನಿರ್ವಹಿಸುವಲ್ಲಿ ಖಜಾನೆ-2 ಯೋಜನೆಯನ್ನು ಈಗಾಗಲೇ ರಾಜ್ಯಾದ್ಯಂತ ಜಾರಿಗೊಳಿಸಲಾಗಿದೆ. ಈ ವ್ಯವಸ್ಥೆಯಡಿ ಪಿಂಚಣಿ ಮಂಜೂರಾತಿಯಿಂದ ಪಿಂಚಣಿ ಪಾವತಿಯವರೆಗೆ ಎಲ್ಲಾ ಹಂತಗಳಲ್ಲಿ ವಿದ್ಯುನ್ಮಾನ ತಂತ್ರಾಂಶದ ಮೂಲಕ ಮಾಹಿತಿ ವರ್ಗಾವಣೆಯಾಗುವ ಕಾರಣ ಹಂತವಾರು ವಿವರ ಪಡೆಯಲು ಅವಕಾಶವಿದೆ. ಖಜಾನೆ-2 ಯೋಜನೆಯು ಸುಭದ್ರ, ಪಾರದರ್ಶಕ ಹಾಗೂ ನಿಖರ ವ್ಯವಸ್ಥೆಯಾಗಿರುವ ಹಿನ್ನೆಲೆಯಲ್ಲಿ ಈಗಾಗಲೇ ಖಜಾನೆ-1ರಲ್ಲಿ ಪಿಂಚಣಿ ಪಡೆಯುತ್ತಿರುವ ಫಲಾನುಭವಿಗಳ ಮಾಹಿತಿಯನ್ನು ಸಹ ಕಡ್ಡಾಯ ವಿವರಗಳೊಂದಿಗೆ ಅನುಕಲನೆ ಮೂಲಕ ಖಜಾನೆ-2 ತಂತ್ರಾಂಶಕ್ಕೆ ವರ್ಗಾಯಿಸಲಾಗುತ್ತಿದೆ.</td>
</tr>
</table>

| | |
|---|---|
| | ಸಾಮಾಜಿಕ ಭದ್ರತಾ ಯೋಜನೆಯಡಿ ಪಿಂಚಣಿಯನ್ನು ಅರ್ಹ ಫಲಾನುಭವಿಗಳಿಗೆ ಬ್ಯಾಂಕ್ ಮತ್ತು EMOಗಳ ಮೂಲಕ ಏಕಕಾಲದಲ್ಲಿ ಬಿಡುಗಡೆಗೊಳಿಸಿ ಪಿಂಚಣಿ ಪಾವತಿ ಮಾಡಲಾಗುತ್ತಿದೆ. Core Banking ವ್ಯವಸ್ಥೆಯಡಿ ತ್ವರಿತವಾಗಿ ಪಿಂಚಣಿ ವಿತರಣೆಯಾಗುತ್ತಿದೆ. ಅದೇ ರೀತ್ಯಾ ಅಂಚೆ ಕಛೇರಿಯಿಂದ EMO ಮೂಲಕ ಅಂಗವಿಕಲರಿಗೆ ಹಾಗೂ ವಯೋವೃದ್ಧರಿಗೆ ಖುದ್ದು ಮನೆ ಬಾಗಿಲಿಗೆ ಪಿಂಚಣಿಯನ್ನು ತಲುಪಿಸುವ ನಿಟ್ಟಿನಲ್ಲಿ EMO (ಮನಿಯಾರ್ಡರ್) ವ್ಯವಸ್ಥೆಯನ್ನು ಸಹ ಹೊಂದಲಾಗಿದೆ.<br>ಕೆಲವು ಪ್ರಕರಣಗಳಲ್ಲಿ ಫಲಾನುಭವಿಗಳ ಬ್ಯಾಂಕ್ ಖಾತೆ ವಿವರ/ IFSC CODE / PINCODE ಮಾಹಿತಿಯನ್ನು ನಿಖರವಾಗಿ ನೀಡದೆ ಇರುವ ಕಾರಣ NO SUCH ACCOUNT/ INVALID BANK DETAILS ಮತ್ತು INVALID ADDRESS ಕಾರಣದಿಂದ ಪಿಂಚಣಿ ಸ್ಥಗಿತಗೊಂಡಿದ್ದು, ಈ ಬಗ್ಗೆ ಪರಿಶೀಲಿಸಿ ಬ್ಯಾಂಕ್ ಖಾತೆ ವಿವರ ಹಾಗೂ ವಿಳಾಸ ನ್ಯೂನತೆಯನ್ನು ಸರಿಪಡಿಸಲು ತಂತ್ರಾಂಶದಲ್ಲಿ ಅವಕಾಶ ಕಲ್ಪಿಸಲಾಗಿದೆ. ಫಲಾನುಭವಿಗಳು ಅಗತ್ಯ ಮಾಹಿತಿ ನೀಡಿದಲ್ಲಿ ನ್ಯೂನತೆಯನ್ನು ಸರಿಪಡಿಸಿ ತಂತ್ರಾಂಶದಲ್ಲಿ ತಹಸೀಲ್ದಾರರು ಅನುಮೋದನೆ ನೀಡಿದ ನಂತರ ಸರಿಪಡಿಸಲಾದ ಮಾಹಿತಿಯನ್ನು ಖಜಾನೆಗೆ ಅನುಕಲನೆ ಮೂಲಕ ವರ್ಗಾಯಿಸಿ ತ್ವರಿತವಾಗಿ ಪಿಂಚಣಿ ಪಾವತಿಗೆ ಕ್ರಮವಹಿಸಲಾಗುತ್ತಿದೆ. |

**NO. DSSP-LCQ-4/2020**

(ಆರ್.ಅಶೋಕ್)
ಕಂದಾಯ ಸಚಿವರು

## ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ.ಕೆ.ಎ.ತಿಪ್ಪೇಸ್ವಾಮಿ(ನಾಮನಿರ್ದೇಶನ ಹೊಂದಿರುವವರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1182(1344)ಕ್ಕೆ ಅನುಬಂಧ

| ಕ್ರ. ಸಂ. | ಯೋಜನೆ | ಬಿಡುಗಡೆಯಾದ ಅನುದಾನ (ಕೋಟಿಗಳಲ್ಲಿ) | | | ಖರ್ಚಾದ ಅನುದಾನ (ಕೋಟಿಗಳಲ್ಲಿ) | | | ಫಲಾನುಭವಿಗಳ ಸಂಖ್ಯೆ | | |
|---|---|---|---|---|---|---|---|---|---|---|
| | | 2016-17 | 2017-18 | 2018-19 | 2016-17 | 2017-18 | 2018-19 | 2016-17 | 2017-18 | 2018-19 |
| 1. | ವೃದ್ಧಾಪ್ಯ ವೇತನ | 521.03 | 543.12 | 738.17 | 413.72 | 450.71 | 698.96 | 747092 | 851048 | 1004276 |
| 2. | ವಿಧವಾ ವೇತನ | 1009.19 | 1123.78 | 1247.29 | 951.22 | 988.99 | 1204.18 | 1620771 | 1704779 | 1766827 |
| 3. | ಅಂಗವಿಕಲ ವೇತನ | 906.57 | 910.34 | 1097.79 | 829.34 | 872.50 | 1060.18 | 859213 | 528660 | 486402 |
| 4. | ಸಂಧ್ಯಾ ಸುರಕ್ಷಾ ಯೋಜನೆ | 1455.24 | 1590.51 | 2320.17 | 1394.80 | 1473.64 | 2200.96 | 2367077 | 901288 | 934957 |
| 5. | ಮನಸ್ವಿನಿ | 63.00 | 63.00 | 63.00 | 52.32 | 61.31 | 80.08* | 88402 | 105579 | 114192 |
| 6. | ಮೈತ್ರಿ | 3.15 | 1.26 | 1.26 | 0.77 | 0.88 | 1.14 | 1239 | 1435 | 1532 |
| 7. | ರೈತನ ಪತ್ನಿಗೆ ವಿಧವಾ ವೇತನ | 5.29 | 5.29 | 7.18 | 1.21 | 6.00 | 7.86* | 1424 | 2985 | 3641 |
| 8. | ಆಸಿಡ್ ದಾಳಿಗೆ ಒಳಗಾದ ಮಹಿಳೆಯರಿಗೆ ಪಿಂಚಣಿ ಯೋಜನೆ | 0.57 | 0.57 | 0.57 | 0.03 | 0.09 | 0.11 | 13 | 29 | 27 |
| 9. | ಎಂಡೋಸಲ್ಫನ್ ಸಂತ್ರಸ್ಥರಿಗೆ ಮಾಸಾಶನ | 22.68 | 26.21 | 21.20 | 20.84 | 16.80 | 18.74 | 6068 | 4143 | 4398 |
| ಒಟ್ಟು | | **3986.72** | **4264.08** | **5496.63** | **3664.25** | **3870.92** | **5272.21** | **5691299** | **4099946** | **4316252** |

* ಹೆಚ್ಚುವರಿ ವೆಚ್ಚವನ್ನು ವೃದ್ಧಾಪ್ಯ ವೇತನ ಯೋಜನೆಯಡಿ ಲಭ್ಯವಿದ್ದ ಅನುದಾನದಲ್ಲಿ ಮರುಹೊಂದಾಣಿಕೆ ಮಾಡಿಕೊಳ್ಳಲಾಗಿದೆ.